## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 806(730)

ಸದಸ್ಯರ ಹೆಸರು : ಶ್ರೀ ಯು.ಬಿ. ವೆಂಕಟೇಶ್

ಉತ್ತರಿಸ ಬೇಕಾದ ದಿನಾಂಕ : 12.03.2020

ಉತ್ತರಿಸಬೇಕಾದ ಸಚಿವರು : ಮಾನ್ಯ ಮುಖ್ಯಮಂತ್ರಿಯವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ನಗರದಲ್ಲಿ ವಸತಿ ಉದ್ದೇಶಕ್ಕೆ ನಿರ್ಮಾಣಗೊಂಡ ಬಡಾವಣೆಗಳು ವಸತಿಯೇತರ ಬಡಾವಣೆಗಳಾಗಿ ಪರಿವರ್ತನೆಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಆ ಬಡಾವಣೆಗಳು ಯಾವುವು; | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯಲ್ಲಿ ನಿರ್ಮಾಣವಾಗಿರುವ ವಸತಿ ಬಡಾವಣೆಗಳು ಸಂಪೂರ್ಣವಾಗಿ ವಸತಿಯೇತರ ಬಡಾವಣೆಗಳಾಗಿ ಪರಿವರ್ತನೆಗೊಂಡಿರುವುದಿಲ್ಲ. ಆರ್.ಎಂ.ಪಿ–2015ರ ವಲಯ ನಿಯಮಾವಳಿಯಲ್ಲಿ ರಿಂಗ್–1 ಮತ್ತು ರಿಂಗ್–2ರ ವಸತಿ (ಮುಖ್ಯ) ಹಾಗೂ ವಸತಿ (ಮಿಶ್ರ) ವಲಯಗಳಲ್ಲಿ ರಸ್ತೆ ಅಗಲ 40 ಅಡಿ ಗಳಿಗಿಂತ ಹೆಚ್ಚಿದಲ್ಲಿ ಕಟ್ಟಡದ ವಿಸ್ತೀರ್ಣದಲ್ಲಿ ಶೇ.20 ಅಥವಾ 50 ಚ.ಮೀ. ಯಾವುದು ಹೆಚ್ಚು ಇದೆಯೋ ಅದನ್ನು ಬಳಸಲು ಅವಕಾಶ ಕಲ್ಪಿಸಲಾಗಿತ್ತು. ಅದರಂತೆ, ವಸತಿ ಬಡಾವಣೆಯಲ್ಲಿನ ಕೆಲವು ನಿವೇಶನಗಳಲ್ಲಿ ವಸತಿಯೇತರ ಕಟ್ಟಡಗಳು ನಿಯಮದಂತೆ ಬಂದಿರುವುದು ಗಮನಕ್ಕೆ ಬಂದಿರುತ್ತದೆ. ಇಂತಹ ವಸತಿಯೇತರ ಕಟ್ಟಡಗಳನ್ನು ನಿಯಂತ್ರಿಸುವ ಸಂಬಂಧ ಸರ್ಕಾರದಿಂದ ದಿನಾಂಕ:20.03.2015ರ ಅಧಿಸೂಚನೆಯಲ್ಲಿ ವಲಯ ನಿಯಮಾವಳಿಗಳಿಗೆ ತಿದ್ದುಪಡಿ ತಂದಿದ್ದು, ಅದರಂತೆ, ರಸ್ತೆ ಅಗಲ 40 ಅಡಿ ಗಳಿಗಿಂತ ಹೆಚ್ಚಿದ್ದಲ್ಲಿ ಕಟ್ಟಡ ವಿಸ್ತೀರ್ಣದಲ್ಲಿ ಶೇ.20 ಅಥವಾ 50 ಚ.ಮೀ. ಯಾವುದು ಕಡಿಮೆ ಇದೆಯೋ ಅದನ್ನು ಬಳಸಲು ಅವಕಾಶ ಕಲ್ಪಿಸಿದೆ. ಇದರಿಂದ ವಸತಿ ವಲಯದಲ್ಲಿ ವಸತಿಯೇತರ ಚಟುವಟಿಕೆಗಳು ನಿಯಂತ್ರಣಗೊಳ್ಳುತ್ತವೆ. |
| ಆ) | ಆ ರೀತಿ ವಸತಿಯಿಂದ ವಸತಿಯೇತರಕ್ಕೆ ಪರಿವರ್ತನೆಗೊಂಡ ಸಂದರ್ಭದಲ್ಲಿ ಸರ್ಕಾರಕ್ಕೆ ಪಾವತಿಸಬೇಕಾದ ತೆರಿಗೆಯನ್ನು ವಂಚಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಪ್ರಕರಣಗಳ ಸಂಖ್ಯೆ ಎಷ್ಟು; | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಬರುವ ಸ್ವತ್ತುಗಳಿಗೆ ತೆರಿಗೆದಾರರು/ಅನುಭವದಾರರು ವಸತಿ/ವಸತಿಯೇತರ ಉಪಯೋಗಕ್ಕನುಗುಣವಾಗಿ ಸ್ವಯಂ ಘೋಷಣೆ ಆಸ್ತಿ ತೆರಿಗೆ ಪದ್ಧತಿ ಅಡಿಯಲ್ಲಿ ಘೋಷಣೆಗಳನ್ನು ಸಲ್ಲಿಸಿ ಆಸ್ತಿ ತೆರಿಗೆ ಪಾವತಿಸುತ್ತಿರುತ್ತಾರೆ. |
| ಇ) | ಇದರಿಂದ ಸರ್ಕಾರದ ಬೊಕ್ಕಸಕ್ಕೆ ಆಗಿರುವ ಹಾನಿ ಎಷ್ಟು ಮತ್ತು ಸರ್ಕಾರ ಕೈಗೊಂಡ ಕ್ರಮಗಳೇನು? | ತೆರಿಗೆದಾರರು /ಅನುಭವದಾರರು ತಮ್ಮ ಸ್ವತ್ತುಗಳಿಗೆ ಸ್ವಯಂ ಘೋಷಣೆ ಆಸ್ತಿ ತೆರಿಗೆ ಪದ್ಧತಿ ಅಡಿಯಲ್ಲಿ ಘೋಷಣೆಗಳನ್ನು ಸಲ್ಲಿಸಲು ಅವಕಾಶ ಕಲ್ಪಿಸಲಾಗಿರುತ್ತದೆ. ಒಂದುವೇಳೆ ತೆರಿಗೆದಾರರು ಸ್ವತ್ತಿನ ವಿವರಗಳನ್ನು ತಪ್ಪಾಗಿ ಘೋಷಿಸಿಕೊಂಡಲ್ಲಿ ಕೆ.ಎಂ.ಸಿ. ಕಾಯ್ದೆ–1976ರ ಕಲಂ 108ಎ ಹಾಗೂ ಅದರಡಿಯಲ್ಲಿ ರಚಿಸಲಾಗಿರುವ ನಿಯಮಾವಳಿಗಳಂತೆ ಕ್ರಮ ಕೈಗೊಳ್ಳಲಾಗುತ್ತಿದೆ. |

ಸಂ: ನಅಇ 48 ಬೆಂಭೂಸ್ವಾ 2020

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್. ಯಡಿಯೂರಪ್ಪ)

ಮುಖ್ಯಮಂತ್ರಿ